‘ಮುಂಜಾವು’ ಚಂದಾ ದರ
ಆಜೀವ ಚಂದಾ ೨೦೦ ರೂ
ವಾರ್ಷಿಕ ಚಂದಾ ೨೦ ರೂ.
ಬಿಡಿ ಪ್ರತಿ ೪೦ ಪೈಸೆ

# ಮುಂಜಾವು

ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್

‘ಮುಂಜಾವು’ ಜಾಹೀರಾತು ದರ
( ಕಾಲಂ ಸೆಂ. ಮಿ. ಗೆ )
ಮುಖ ಪುಟದಲ್ಲಿ: ೫ ರೂ.
ಇತರ ಪುಟಗಳಲ್ಲಿ: ೪ ರೂ.

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯

ಸಂಪುಟ ೧ | ಕೊಪ್ಪ | ಗಾಂಧೀ ಜಯಂತಿ ೧೯೮೨ | ಶನಿವಾರ | ಸಂಚಿಕೆ ೭ | ಬೆಲೆ ೪೦ ಪೈಸೆ

### ಸರ್ಕಾರಿ ಸೌಲಭ್ಯ ಬಡವರಿಗೆ ಮುಟ್ಟಿಸುವಲ್ಲಿ

## ಕರ್ತವ್ಯಲೋಪವೆಸಗುವ ಅಧಿಕಾರಿ ವಿರುದ್ಧ ಭದ್ರತಾ ಕಾಯ್ದೆ ಕ್ರಮ: ಗಂಗಾಧರಪ್ಪ

**(ವರದಿ: ಕಂ. ಕ. ಕೃ.)**

ಎಲೆಮಡಲು : ಸರ್ಕಾರ ಒದಗಿಸುವ ಸೌಲಭ್ಯಗಳನ್ನು ಶ್ರೀಸಾಮಾನ್ಯನಿಗೆ ಮುಟ್ಟಿಸುವಲ್ಲಿ ಅಧಿಕಾರ ದುರುಪಯೋಗ ಮಾಡುವ ಅಧಿಕಾರಿಗಳ ವಿರುದ್ಧ ಭದ್ರತಾ ಕಾಯ್ದೆ ಅನ್ವಯ ಕಠಿಣ ಕ್ರಮ ತೆಗೆದುಕೊಳ್ಳುವುದಾಗಿ ಜಿಲ್ಲಾಧಿಕಾರಿ ಎಸ್.ಎಲ್. ಗಂಗಾಧರಪ್ಪ ಎಚ್ಚರಿಸಿದ್ದಾರೆ.

ಸೆ. ೨೦ ರಂದು ಇಲ್ಲಿನ ಗ್ರಾಮಪಂಚಾಯ್ತಿಯ ಹೊಸ ಕಟ್ಟಡವನ್ನು ಬೇಗಾನೆ ರಾಮಯ್ಯ ಉದ್ಘಾಟಿಸಿ ಸ. ಗ್ರಾ. ಅ. ಯೋಜನೆಯ ಸಾಲ ಹಂಚಿದ ಸಮಾರಂಭದಲ್ಲಿ ಮಹಿಳಾ ಸಮಾಜದ ಉದ್ಘಾಟನೆ ನೆರವೇರಿಸಿ ಜಿಲ್ಲಾಧಿಕಾರಿಗಳು ಮಾತನಾಡುತ್ತಿದ್ದರು.

ಬಿ. ಜಿ. ಚಿದಂಬರ್ ಅಧ್ಯಕ್ಷತೆ ವಹಿಸಿದ್ದರು. ನ. ರಾ. ಪುರ ತಾ. ಅ. ಮಂ. ಅಧ್ಯಕ್ಷ ಕೆ. ಟಿ. ಚಿನ್ನಯ್ಯಗೌಡ ನಿವೇಶನದ ಹಕ್ಕು ಪತ್ರಗಳನ್ನು ಪಿ. ಜಿ. ಗುರ್ಜರ್ ಹರಿಜನ ಮಕ್ಕಳಿಗೆ ಬಟ್ಟೆಗಳನ್ನು ಹಂಚಿದರು.

ಮಹಿಳಾ ಸಮಾಜದ ಅಧ್ಯಕ್ಷೆ ಆನಂದಲಕ್ಷ್ಮಿ ವರದಿ ಓದಿದರು. ಬಿ. ಮಹಮುದ್ ವಂದಿಸಿದರು.

### ಕುದ್ರೆ ಗುಂಡಿಯಲ್ಲಿ ಸಾಲ ಹಂಚಿಕೆ

ಕುದ್ರೆಗುಂಡಿ: ಇಲ್ಲಿನ ಕರ್ನಾಟಕ ಬ್ಯಾಂಕ್ ಶಾಖೆ ಸ. ಗ್ರಾ. ಅ. ಯೋಜನೆಯಡಿ ಮಂಜೂರು ಮಾಡಿರುವ ೪೧,೯೫೦ ರೂ. ಗಳ ಸಾಲ ಪತ್ರಗಳನ್ನು ಬೇಗಾನೆ ರಾಮಯ್ಯ ಸೆ. ೨೦ ರಂದು ನಡೆದ ಸಮಾರಂಭದಲ್ಲಿ ಹಂಚಿದರು. ಜಿಲ್ಲಾಧಿಕಾರಿ ಎಸ್.ಎಲ್.ಗಂಗಾಧರಪ್ಪ ಉಚಿತ ನಿವೇಶನಗಳ ಹಕ್ಕು ಪತ್ರಗಳನ್ನು ನೀಡಿದರು. ಅಜಿಲ ಸಹೋದರರು ಕಟ್ಟಿಸಿರುವ ಪ್ರಯಾಣಿಕರ ತಂಗುದಾಣ ಮತ್ತು ಶ್ರೀಮತಿ ಶೀಲಾ ಗುರ್ಜರ್ ಕಟ್ಟಿಸಿರುವ ಮಹಿಳಾ ಮಂಡಳದ ಕಟ್ಟಡಗಳನ್ನು ಬೇಗಾನೆ ಉದ್ಘಾಟಿಸಿದರು. ಈ ಇಬ್ಬರು ದಾನಿಗಳನ್ನೂ ಶಾಲು ಹೊದಿಸಿ ಸನ್ಮಾನಿಸಲಾಯಿತು.

ಪಂಚಾಯ್ತಿ ಅಧ್ಯಕ್ಷ ಪಿ.ಜಿ.ಗುರ್ಜರ್ ಅಧ್ಯಕ್ಷತೆ ವಹಿಸಿದ್ದರು.

### ಕೊಪ್ಪದಲ್ಲಿ ಜನತಾ ಪಕ್ಷದ ಕಾರ್ಯಕರ್ತರ ಸಭೆ

ಕೊಪ್ಪ: ಶೃಂಗೇರಿ ವಿಧಾನ ಸಭಾ ಕ್ಷೇತ್ರದ ಜನತಾ ಪಕ್ಷದ ಕಾರ್ಯಕರ್ತರ ಸಭೆ ಸೆ. ೩೮ ರಂದು ಇಲ್ಲಿ ನಡೆಯಿತು. ಬರಲಿರುವ ಚುನಾವಣೆಯಲ್ಲಿ ಎಲ್ಲಾ ವಿರೋಧ ಪಕ್ಷಗಳ ಪರವಾಗಿ ಒಬ್ಬನೇ ಅಭ್ಯರ್ಥಿಯನ್ನು ನಿಲ್ಲಿಸಲು ಕೆಲಸ ಮಾಡಬೇಕೆಂದು ಸಭೆ ಒಮ್ಮತದಿಂದ ನಿರ್ಣಯಿಸಿತು. ಪಕ್ಷದ ನ. ರಾ. ಪುರ ತಾ|| ಘಟಕದ ಅಧ್ಯಕ್ಷತೆಗೆ ಈಚೆಗೆ ರಾಜೀನಾಮೆ ಕೊಟ್ಟಿರುವ ಮಾಗ ಚಂದ್ರಶೇಖರ್ ಅವರೂ ಸಭೆಯಲ್ಲಿ ಭಾಗವಹಿಸಿದ್ದರು.

ರಾಜ್ಯ ಜನತಾ ಪಕ್ಷದ ಮಾಜಿ ಅಧ್ಯಕ್ಷ ಹೆಚ್. ಡಿ. ದೇವೇಗೌಡರು ಭಾಗವಹಿಸಬೇಕಿದ್ದು ಹೊಳೆನರಸೀಪುರದ ಗೋಲಿಬಾರ್ ಗಲಾಟೆಯಿಂದಾಗಿ ಅವರು ಜಿಲ್ಲಾ ಪ್ರವಾಸವನ್ನು ಮುಂದೂಡಿದ್ದರಿಂದ ಭಾಗವಹಿಸಲಿಲ್ಲ.

### ಸ್ಪೈ ಪೆಂಡರಿಗಳಿಗೆ ಮತ್ತೆ ಆರು ತಿಂಗಳ ‘ಜೀವ’

ಬೆಂಗಳೂರು: ಸೆಪ್ಟೆಂಬರ್ ೩೦ ಕ್ಕೆ ಅವಧಿ ಮುಗಿಯ ಬೇಕಿದ್ದ ರಾಜ್ಯದ ಸ್ಟೈಪೆಂಡರಿಗಳಿಗೆ ಮತ್ತೆ ಆರು ತಿಂಗಳ ಕಾಲ ಉದ್ಯೋಗವನ್ನು ಮುಂದುವರಿಸಲು ರಾಜ್ಯ ಸರ್ಕಾರ ನಿರ್ಧರಿಸಿದೆಯೆಂದು ವರದಿಯಾಗಿದೆ.

### ಶೃಂಗೇರಿಯ ಸರ್ಕಾರಿ ವೈದ್ಯರು:

## ಮಾನವೀಯ ವೃತ್ತಿಗೊಂದು ಕಳಂಕ

ಶೃಂಗೇರಿ: ಇಲ್ಲಿನ ಸರ್ಕಾರಿ ವೈದ್ಯರಾದ ಡಾ|| ಕೃಷ್ಣ ನಾಯ್ಕರ ದಿನಚರಿ ವೈದ್ಯದಂಥ ಅತ್ಯಂತ ಮಾನವೀಯ ವೃತ್ತಿಗೆ ಒಂದು ದೊಡ್ಡ ಕಳಂಕವಾಗಿದೆ ಎಂದು ಶೃಂಗೇರಿಯ ಆಸುಪಾಸಿನ ಜನ ವ್ಯಥೆಪಡುತ್ತಾರೆ.

ಇವರ ಬಗೆಗಿನ ದೂರುಗಳು ಮಿತಿಮೀರಿ [illegible].

ಹಗಲಿಡೀ, ಕೆಲಸದ ವೇಳೆಯಲ್ಲೂ ಕಂಠಮಟ್ಟ ಕುಡಿದಿರುವ ಇವರು ಮಧ್ಯಾಹ್ನದ ನಂತರವಂತೂ ಆಸ್ಪತ್ರೆಯಲ್ಲಿ ಸಾಮಾನ್ಯವಾಗಿ ಸಿಗುವುದೇ ಇಲ್ಲ ಎನ್ನಲಾಗಿದೆ. ರಾಜಾರೋಷವಾಗಿ, [illegible] ಸಾರಾಯಿ ಅಂಗಡಿಯಲ್ಲಿ ನಿಂತು ಕುಡಿದು ಆಸ್ಪತ್ರೆಗೆ ಬರುವುದು ಕಂಡವರಿದ್ದಾರೆ. ಸಿಕ್ಕ ಸಿಕ್ಕಲ್ಲಿ ಕಾರಿಕೊಂಡು, ಚರಂಡಿಗೆ ಮಗುಚಿ ಬಿದ್ದಿರುವ ಘಟನೆಗಳು ಪತ್ರಿಕೆಗಳಲ್ಲೂ ವರದಿಯಾಗಿವೆ.

ಮೊನ್ನೆ ಸೆ. ೨೦ ರಿಂದ ಇಲ್ಲಿ ನಡೆದ ಕುಟುಂಬ ಯೋಜನಾ ಶಸ್ತ್ರ ಚಿಕಿತ್ಸಾ ಶಿಬಿರದಲ್ಲಿ ಕೊಪ್ಪದ ವೈದ್ಯಾಧಿಕಾರಿ ಡಾ|| ರಂಗನಾಥನ್ ಬಂದು ಶಸ್ತ್ರ ಚಿಕಿತ್ಸೆ ನಡೆಸಿ ಹೋದ ನಂತರ ಈ ಮನುಷ್ಯ ಮೂರು ದಿನವಾದರೂ ಶಿಬಿರದ ಕಡೆ ಮುಖವನ್ನೇ ಹಾಕಲಿಲ್ಲ ಎನ್ನಲಾಗಿದೆ. ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡ ಎಲ್ಲ ೧೯ ಮಂದಿಯನ್ನೂ ದಾದಿಯರೇ ನೋಡಿಕೊಂಡರಂತೆ. ಈ ಬಗ್ಗೆ ಎಲ್ಲಾ ಕಡೆ ತೀವ್ರ ಅಸಂತೋಷ ವ್ಯಕ್ತವಾಗುತ್ತಿದ್ದು, ಸೆ. ೨೭ ರಂದು ಮರ್ಕಲ್ ಗ್ರಾಮ ಪಂಚಾಯ್ತಿಯ ಸಭೆಯಲ್ಲಿ ಇಂಥ ವರ್ತನೆ ಖಂಡಿಸಿ ಸರ್ವಾನುಮತದ ನಿರ್ಣಯ ಅಂಗೀಕರಿಸಲಾಗಿದೆ.

### ಕೆಸವೆ ಗ್ರಾಮ ದತ್ತು

ಕೊಪ್ಪ : ೧೯೮೨ನೇ ಉತ್ಪಾದನಾ ವರ್ಷದ ಅಂಗವಾಗಿ ಈ ತಾಲ್ಲೂಕಿನ ಕೆಸವೆ ಗ್ರಾಮವನ್ನು ಸರ್ಕಾರ ದತ್ತು ತೆಗೆದುಕೊಂಡಿದೆ. ಗ್ರಾಮದ ಸರ್ವತೋಮುಖವಾದ ಅಭಿವೃದ್ಧಿಗಾಗಿ ಸರ್ಕಾರದ ವಿವಿಧ ಇಲಾಖೆಗಳ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದು, ಈ ಸಂಬಂಧವಾಗಿ ಆಯಾ ಇಲಾಖೆಗಳ ಪ್ರತಿನಿಧಿಗಳೂ ಸೇರಿದಂತೆ ಸಮಿತಿಯೊಂದನ್ನು ರಚಿಸಲಾಗಿದ್ದು, ಪಂಚಾಯ್ತಿ ಅಧ್ಯಕ್ಷ ಕೆ. ಎಸ್. ಶಾಂತಾರಾಂ ಅದರ ಅಧ್ಯಕ್ಷ, ತಾ|| ಸಹಾಯಕ ಕೃಷಿ ನಿರ್ದೇಶಕ ಎಂ. ಎಸ್. ಸುಬ್ಬೇಗೌಡ ಕಾರ್ಯದರ್ಶಿ ಹಾಗೂ ಅರಣ್ಯಾಧಿಕಾರಿ ಕೆ. ಸುಂದರ ನಾಯ್ಕ್ ತನಿಖಾಧಿಕಾರಿಗಳಾಗಿದ್ದಾರೆ.

### ಅಸಗೋಡಿನಲ್ಲಿ ಮಹಿಳಾ ಸಮಾಜ, ಶಾಲಾ ಕೊಠಡಿ ಉದ್ಘಾಟನೆ

ಅಸಗೋಡು: ಇಲ್ಲಿನ ಮಹಿಳಾ ಸಮಾಜ ಮತ್ತು ಶಾಲಾ ಕೊಠಡಿಗಳನ್ನು ಸೆ.೨೦ ರಂದು ಬೇಗಾನೆ ರಾಮಯ್ಯ ಉದ್ಘಾಟಿಸಿದರು. ಜಿಲ್ಲಾಧಿಕಾರಿ ಎಸ್. ಎಲ್. ಗಂಗಾಧರಪ್ಪ ಸಮುದಾಯ ಕಟ್ಟಡವನ್ನು ಉದ್ಘಾಟಿಸಿ, ಹೊಲಿಗೆ ತರಬೇತಿ ಪಡೆದವರಿಗೆ ಅರ್ಹತಾ ಪತ್ರ ನೀಡಿದರು.

ಬಿ. ಜಿ. ಚಿದಂಬರ್ ಅಧ್ಯಕ್ಷತೆ ವಹಿಸಿದ್ದರು. ಪಂಚಾಯ್ತಿ ಅಧ್ಯಕ್ಷ ಬಿ. ಎಂ. ಗೋಪಾಲ್ ಸ್ವಾಗತಿಸಿ, ಶ್ರೀನಿವಾಸಯ್ಯ ವಂದಿಸಿದರು.

### ಜಿಲ್ಲಾ ವಿರೋಧ ಪಕ್ಷಗಳ ಸಂಯುಕ್ತ ಹೋರಾಟ ಸಮಿತಿ

ಚಿಕ್ಕಮಗಳೂರು: ಅಕ್ರಮಗಳ ವಿರುದ್ಧ ಹೋರಾಟ ಮಾಡಲು ಅನುಕೂಲವಾಗುವಂತೆ ವಿವಿಧ ವಿರೋಧ ಪಕ್ಷಗಳ ಪ್ರತಿನಿಧಿಗಳನ್ನೊಳಗೊಂಡ ಸಂಚಾಲಕ ಸಮಿತಿಯೊಂದನ್ನು ರಚಿಸಲಾಗಿದೆ. ಈ ಸಮಿತಿಗೆ ಮಾಜಿ ಶಾಸಕ ಹಂಪಿ ಶಿವಣ್ಣ ಅಧ್ಯಕ್ಷ ಹಾಗೂ ಟಿ. ಎಸ್. ಉತ್ತಮಯ್ಯ ಕಾರ್ಯದರ್ಶಿಗಳಾಗಿದ್ದಾರೆ.

### ಹೇರೂರಿನಲ್ಲಿ ರಂಗಮಂದಿರ, ಮಹಿಳಾ ಸಮಾಜಗಳ ಕಟ್ಟಡ ಉದ್ಘಾಟನೆ

ಹೇರೂರು: ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಯೋಜನೆಯಲ್ಲಿ ಕಟ್ಟಿಸಿರುವ ರಂಗಮಂದಿರ ಮತ್ತು ಪೂರ್ಣಿಮ ಮಹಿಳಾ ಸಮಾಜದ ಕಟ್ಟಡಗಳನ್ನು ಸೆ. ೨೦ ರಂದು ಬೇಗಾನೆ ರಾಮಯ್ಯ ಉದ್ಘಾಟಿಸಿದರು. ಬಿ. ಜಿ. ಚಿದಂಬರ್ ಅಧ್ಯಕ್ಷತೆ ವಹಿಸಿದ್ದರು.

ನ. ರಾ. ಪುರ ತಾ|ಅ|ಮಂ| ಅಧ್ಯಕ್ಷ ಕೆ. ಟಿ. ಚಿನ್ನಯ್ಯಗೌಡರು ಹರಿಜನ ಶಾಲಾ ಮಕ್ಕಳಿಗೆ ಬಟ್ಟೆಗಳನ್ನೂ, ಜಿಲ್ಲಾಧಿಕಾರಿ ಎಸ್. ಎಲ್. ಗಂಗಾಧರಪ್ಪ ಉಚಿತ ನಿವೇಶನಗಳ ಹಕ್ಕು ಪತ್ರಗಳನ್ನೂ ಹಂಚಿದರು. ಪಿ. ಜಿ. ಗುರ್ಜರ್ ಮುಖ್ಯ ಅತಿಥಿಗಳಾಗಿದ್ದರು.

ಹೆಚ್. ವಿ. ಶ್ರೀವತ್ಸ ವಂದಿಸಿದರು.

### ಶೃಂಗೇರಿ ಸಿಂಡಿಕೇಟ್ ಬ್ಯಾಂಕಿಗೆ ೨೫ ವರ್ಷ

ಶೃಂಗೇರಿ: ಇಲ್ಲಿನ ಸಿಂಡಿಕೇಟ್ ಬ್ಯಾಂಕ್ ಅ. ೪ ರಂದು ತನ್ನ ೨೫ ನೇ ಹುಟ್ಟು ಹಬ್ಬ ಆಚರಿಸುತ್ತಿದೆ. ೫೦೦ ಖಾತೆದಾರರೊಂದಿಗೆ ೧೯೫೭ರಲ್ಲಿ ಆರಂಭವಾದ ಈ ಶಾಖೆ ಇಂದು ೧೧ ಸಾವಿರ ಖಾತೆದಾರರನ್ನು ಹೊಂದಿದೆ.

### ಏಲಕ್ಕಿ ಬೆಳೆಗಾರರ ಸಭೆ

(ವರದಿ: ಮಾ. ಶೇ. ಗಣಪತಿ)

ಬಿಳಾಲುಕೊಪ್ಪ :

ಇಲ್ಲಿನ ವಿದ್ಯಾಗಣಪತಿ ಯುವಕ ರೈತ ಸಂಘ ಮತ್ತು ಏಲಕ್ಕಿ ಮಂಡಳಿಗಳ ಸಂಯುಕ್ತ ಆಶ್ರಯದಲ್ಲಿ ಏಲಕ್ಕಿ ಬೆಳೆಗಾರರ ಸಭೆ ಸೆ. ೩೦ ರಂದು ಇಲ್ಲಿ ಪಂಚಾಯ್ತಿ ಅಧ್ಯಕ್ಷ ಬಿ.ಎಸ್. ವಾಸುದೇವಮೂರ್ತಿಯವರ ಅಧ್ಯಕ್ಷತೆಯಲ್ಲಿ ನಡೆಯಿತು.

ಮುಖ್ಯ ಅತಿಥಿಗಳಾಗಿದ್ದ ಹೆಚ್. ಜಿ. ಗೋವಿಂದಗೌಡರು ಮಾತನಾಡಿ, ಆರ್ಥಿಕವಾಗಿ ಬಹಳ ಕಷ್ಟದ ಪರಿಸ್ಥಿತಿಗೆ ಮುಟ್ಟಿರುವ ರೈತ ಜನಾಂಗ ತಮ್ಮ ಪರಿಸ್ಥಿತಿ ಸುಧಾರಿಸಿಕೊಳ್ಳಲು ಏಲಕ್ಕಿ ಒಂದು ಉತ್ತಮ ಬೆಳೆ ಎಂದು ಅಭಿಪ್ರಾಯ ಪಟ್ಟರು.

ಏಲಕ್ಕಿ ಕೃಷಿ ಬಗೆಗಿನ ರೈತರ ಪ್ರಶ್ನೆಗಳಿಗೆ ಏಲಕ್ಕಿ ಮಂಡಳಿ ಉಪನಿರ್ದೇಶಕ ಸಿದ್ಧರಾಮಯ್ಯ ವಿವರವಾಗಿ ಉತ್ತರ ಕೊಟ್ಟರು. ಏಲಕ್ಕಿ ಬೆಳೆಗಾಗಿ ಮಂಡಳಿಯ ಕಾರ್ಯಕ್ರಮಗಳನ್ನು ಕೊಪ್ಪದ ಕ್ಷೇತ್ರಾಧಿಕಾರಿ ಜಯರಾಂ ಪರಿಚಯಿಸಿದರು.

ಬಿ.ಆರ್. ವೆಂಕಟ ಕೃಷ್ಣ ಸ್ವಾಗತಿಸಿ, ಜಯರಾಂ ವಂದಿಸಿದರು.

---

ನಮ್ಮ [illegible] ಸಂಚಿಕೆ ಪ್ರಕಟವಾಗಿಲ್ಲ. ಸಂ.

ಗಾಂಧೀ ಜಯಂತಿ

# ಶ್ರಮದಾನದ ದಿನವಾಗಿರಲಿ

ಲೇ: ಡಾ|| ಎಸ್. ವಿ. ಮಲ್ಲಿಕಾರ್ಜುನ ಭಟ್ಟ

ನಾವು ಗೊಡ್ಡು ಆಚರಣೆಗಳ ಜನ. ಅರ್ಥವಿರಲಿ, ಇಲ್ಲದಿರಲಿ, ಆಚರಿಸಿಕೊಂಡು ಬಂದಿದ್ದನ್ನು ಕುರುಡಾಗಿ ಅನುಸರಿಸುವುದೇ ಇವತ್ತು ಧರ್ಮ, ಸಂಸ್ಕೃತಿ ಎನ್ನಿಸಿಕೊಳ್ಳುತ್ತಿದೆ. ಒಂದು ಬೋಧನೆಯನ್ನು ಅರ್ಥ ಮಾಡಿಕೊಂಡು ಆಚರಿಸುವುದಕ್ಕಿಂತ ಅದನ್ನು ಉರು ಹೊಡೆದು ಗಟ್ಟಿಯಾಗಿ ಸುಶ್ರಾವ್ಯವಾಗಿ(?) ಕೂಗುವುದು, ಭಾಷಣ ಮಾಡುವುದೇ ಮುಖ್ಯವಾಗಿದೆ; ಬೋಧಿಸಿದವನ ಚಿತ್ರವನ್ನೋ ಮೂರ್ತಿಯನ್ನೋ ಪೂಜಿಸುವುದು ಮೀರಬಾರದ ಸಂಪ್ರದಾಯವಾಗಿದೆ. ಧರ್ಮ-ಸಂಸ್ಕೃತಿಯ ಹೆಸರಿನಲ್ಲಿ ಸಂಕುಚಿತ ಮತೀಯ ಭಾವನೆಯನ್ನು ಕೆರಳಿಸಿ, ಪ್ರತಿವರ್ಷ ನೂರಾರು ನಿರಪರಾಧಿಗಳ ಬಲಿಯಾಗುತ್ತಿದೆ.

ಈ ಗೊಡ್ಡು ಆಚರಣೆಯ ಸಾಲಿಗೆ ಗಾಂಧೀಜಿ ಮತ್ತು ಅವರ ಬೋಧನೆಗಳೂ ಸೇರಿ ಹೋಗಿವೆ. ಸನಾತನ ಧರ್ಮ-ಸಂಸ್ಕೃತಿ, ಅಧ್ಯಾತ್ಮಗಳನ್ನು ಪ್ರತಿಪಾದಿಸಿಯೂ ಗಾಂಧೀಜಿಗೆ ಮತ-ಧರ್ಮದ ಭೇದವಿಲ್ಲದೆ ಎಲ್ಲ ಮನುಷ್ಯರನ್ನೂ ಪ್ರೀತಿಸುವುದು ಸಾಧ್ಯವಾಯಿತು. ಗಾಂಧೀಜಿ ಎಂದರೆ ಪೂಜಿಸುವ ಒಂದು ವಸ್ತುವಲ್ಲ; ನಮ್ಮ ನಡುವೆಯೇ ಬದುಕಿ, ತಾವು ನಂಬಿದ್ದನ್ನು, ಬೋಧಿಸಿದ್ದನ್ನು ಸ್ವತಃ ಆಚರಿಸಿ ತೋರಿಸಿದ ಒಬ್ಬ ಮೇಲ್ಪಂಕ್ತಿಕಾರ ಎಂಬುದನ್ನು ಜ್ಞಾಪಿಸುವ ಈ ಲೇಖನ ಗಾಂಧಿ ಜಯಂತಿಗಾಗಿ ವಿಶೇಷ.

" ಅಹಿಂಸಾ ಸತ್ಯ ಅಸ್ತೇಯಂ
ಬ್ರಹ್ಮಚರ್ಯ ಅಸಂಗ್ರಹ
ಶರೀರಶ್ರಮ ಅಸ್ವಾದ
ಸರ್ವತ್ರ ಭಯವರ್ಜನ|
ಸರ್ವಧರ್ಮೀ ಸಮಾನತ್ವೋ
ಸ್ವದೇಶೀ ಸ್ಪರ್ಶಭಾವನಾ
ಹೀ ಏಕಾದಶ ಸೇವಾವೀ
ನಮ್ರತ್ವೇ ವ್ರತನಿಶ್ಚಯೇ|| "

ಇದು ಗಾಂಧೀಜಿಯವರು ತಮ್ಮ ನಿತ್ಯದ ಪ್ರಾರ್ಥನಾ ಸಭೆಗಳ ಮುಕ್ತಾಯದ ಹಂತದಲ್ಲಿ ಕೈಗೊಳ್ಳುತ್ತಿದ್ದ ಪ್ರತಿಜ್ಞೆ. "ಅಹಿಂಸೆಯನ್ನು ಆಚರಿಸುವುದು, ಸತ್ಯವನ್ನು ಹೇಳುವುದು ಮತ್ತು ಅದಕ್ಕಾಗಿ ಹೋರಾಡುವುದು, ಅಸ್ತೇಯ ಎಂದರೆ ಮನಸ್ಸಿನಲ್ಲಿ ಕೂಡ ಅನ್ಯರ ವಸ್ತುವನ್ನು ಅಪಹರಿಸಲು ಬಯಸದಿರುವುದು, ಬ್ರಹ್ಮಚರ್ಯವನ್ನು ಪಾಲಿಸುವುದು, ಅಸಂಗ್ರಹ ಎಂದರೆ ಅಗತ್ಯಕ್ಕಿಂತ ಹೆಚ್ಚಾಗಿ ಸ್ಥಿರ-ಚರಾಸ್ತಿಗಳನ್ನು ಸಂಗ್ರಹಿಸದಿರುವುದು, ಶರೀರ ಶ್ರಮದಿಂದ ಜೀವಿಸುವುದು, ಸುಖ-ಭೋಗಗಳ ಬಗ್ಗೆ ಅಭಿರುಚಿಯನ್ನು ಬೆಳೆಸಿಕೊಳ್ಳದಿರುವುದು, ಮೃತ್ಯುವೂ ಸೇರಿದಂತೆ ಎಲ್ಲದರ ಭಯವನ್ನು ಬಿಡುವುದು, ಎಲ್ಲಾ ಧರ್ಮಗಳನ್ನು ಸಮನ್ವಯ ದೃಷ್ಟಿಯಿಂದ ನೋಡುವುದು, ಅಸ್ಪೃಶ್ಯತೆಯನ್ನು ಆಚರಿಸದಿರುವುದು— ಈ ಹನ್ನೊಂದು ನಿಯಮಗಳನ್ನು ನಾನು ಪಾಲಿಸುತ್ತೇನೆ" ಎಂಬುದು ಇದರ ಸಾರಾಂಶ.

ಇವುಗಳಲ್ಲಿ ಮೊದಲಿನ ಒಂಬತ್ತು ಭಾರತೀಯ ಸನಾತನ ಧರ್ಮಸಮ್ಮತವಾದ ಆಚರಣೆಗಳು. ಉಪನಿಷತ್ಕಾಲದ ಋಷಿಗಳಿಂದ ಪ್ರಣೀತವಾದ ಜೀವನ ಸೂತ್ರಗಳು. ಪ್ರತಿಯೊಬ್ಬ ಋಷಿಯ ಬದುಕಿನೊಡನೆ ಬೆಸೆದುಕೊಂಡಿದ್ದ ನಿಯಮಗಳು. ಇವುಗಳ ಜೊತೆಗೆ ಗಾಂಧೀಜಿಯವರು ಕಾಲಧರ್ಮಾನುಗುಣವಾಗಿ ಕೊನೆಯೆರಡನ್ನು ಸೇರಿಸಿ ಹನ್ನೊಂದು ನಿಯಮಗಳನ್ನು ಮಾಡಿಕೊಂಡರು. ಅದರಂತೇ ನಡೆದರು. ಮಹಾತ್ಮರಾದರು.

ಗಾಂಧೀಜಿಯ ಅನಂತರದ ದಿನಗಳಲ್ಲಿ ಆದದ್ದೇ ಬೇರೆ. ಗಾಂಧೀ ಟೋಪಿ ಧರಿಸಿ ಗಾಂಧೀ ಭಕ್ತರೆನ್ನಿಸಿಕೊಂಡವರನೇಕರು ಇದಕ್ಕೆ ಸಂಪೂರ್ಣ ವಿರುದ್ಧವಾಗಿ ನಡೆಯತೊಡಗಿದರು. 'ಅಸಂಗ್ರಹ'ವು 'ಸಂಗ್ರಹ'ವಾಗಿ ಮೊಮ್ಮಕ್ಕಳು-ಮರಿಮಕ್ಕಳಿಗಾಗುವಷ್ಟು ಸಂಗ್ರಹಿಸತೊಡಗಿದರು. 'ಅಸ್ವಾದ'ವು 'ಸ್ವಾದ'ವಾಯಿತು. 'ಶರೀರಶ್ರಮ'ವು 'ಶರೀರ ಆಶ್ರಮ'ವಾಗಿ ಆರಾಮವಾಯಿತು. ಕೆಲವರ ಬ್ರಹ್ಮಚರ್ಯದ ಕತೆ ವೃತ್ತಪತ್ರಿಕೆಗಳಲ್ಲಿ ಬರುವಂತಾಯಿತು. ಕೆಲವು ಗಾಂಧೀಭಕ್ತರು ಅವರ ಹೆಸರಿನ ಜಪ ಮಾಡುತ್ತಾ ಅವರ ತತ್ವಕ್ಕೆ ಪ್ರತ್ಯಕ್ಷ ಅವಹೇಳನಕರವಾಗಿ ನಡೆಯತೊಡಗಿದರು. ಇದೆಲ್ಲದರ ಫಲವಾಗಿ ಗಾಂಧೀಜಿಯವರ ಕನಸಿನ "ಭವ್ಯ ಭಾರತ" ಕಾಲ ಗರ್ಭದ ಕನಸಿನಲ್ಲಿಯೇ ಉಳಿಯಿತು.

ಗಾಂಧೀಜಿಯವರು ರಾಜಕೀಯವನ್ನು ಮದಿಸಿದ ಆನೆಯಿದ್ದಂತೆ ಎಂದು ಭಾವಿಸಿದ್ದರು. ಮದವೇರಿದ ಆನೆ ಮನ ಬಂದಲ್ಲಿ ನುಗ್ಗುತ್ತದೆ. ಮನೆ ಮಾರುಗಳನ್ನು ಮುರಿದು ಕೆಡವುತ್ತದೆ. ಹೊಲ-ಗದ್ದೆಗಳನ್ನು ತುಳಿದು ನೆಲಸಮ ಮಾಡುತ್ತದೆ. ಎದುರಾದ ಜೀವಿಗಳನ್ನು ಎತ್ತಿ ಎಸೆಯುತ್ತದೆ. ಅದರಿಂದಾಗುವ ಹಾನಿ ಕಲ್ಪನಾತೀತ. ಆದ್ದರಿಂದ ಅದನ್ನು ಸರಪಳಿಗಳಿಂದ ಬಂಧಿಸಿಡಬೇಕಾಗುತ್ತದೆ. ರಾಜಕೀಯದ ಆನೆಯೂ ಅಷ್ಟೆ. ಅಧಿಕಾರದ ಮದ ಅದರ ತಲೆಗೇರುತ್ತದೆ. ಆಗ ಅದು ಜನರ ಸ್ವಾತಂತ್ರ್ಯವನ್ನು ತುಳಿದು ನುಚ್ಚು ನೂರು ಮಾಡುತ್ತದೆ. ಮೂಲಭೂತ ಹಕ್ಕುಗಳನ್ನು ಎತ್ತಿ ಎಸೆಯುತ್ತದೆ. ಅಭಿವ್ಯಕ್ತಿ ಶಕ್ತಿಯನ್ನು ಹಿಸುಕಿ ಹೊಸಕಿಹಾಕುತ್ತದೆ. ಇದನ್ನು ತಡೆಯಬೇಕಾದರೆ ಅಧಿಕಾರದ ಮದವೇರುವ ರಾಜಕೀಯದ ಆನೆಯನ್ನು ಆಧ್ಯಾತ್ಮಿಕ ಭಾವನೆಯ ಸರಪಳಿಗಳಿಂದ ಬಂಧಿಸಿಡುವುದು ಅಗತ್ಯವೆಂದು ಅವರು ತಿಳಿದಿದ್ದರು. ಆದುದರಿಂದಲೇ ರಾಜಕೀಯವನ್ನು ಪ್ರವೇಶಿಸುವವರು ಈ ಹನ್ನೊಂದು ಆಚರಣೆಗಳಿಗೆ ಬದ್ಧರಾಗಿರಬೇಕೆಂದು ಅವರು ಬಯಸಿದ್ದರು. ಪ್ರತಿನಿತ್ಯ ಪ್ರಾರ್ಥನೆಯ ನಂತರ ತಮ್ಮ ಅನುಯಾಯಿಗಳು ಈ ರೀತಿ ಪ್ರತಿಜ್ಞೆ ಕೈಗೊಳ್ಳುವ ವ್ಯವಸ್ಥೆ ಮಾಡಿದ್ದರು. ರಾಜಕೀಯದಲ್ಲಿರುವವರಲ್ಲಿ ಅನೇಕರು ಈ ಆಚರಣೆಗಳಿಗೆ ತಿಲಾಂಜಲಿಯನ್ನು ಕೊಟ್ಟಿರುವುದೇ ಇಂದು ರಾಜಕೀಯ ಗೊಂದಲಮಯವಾಗಿರುವುದಕ್ಕೆ ಕಾರಣ. ಈ ಆಚರಣೆಗಳಿಗೆ ಬದ್ಧರಾಗಿರುವುದೇ ಈ ಗೊಂದಲದಿಂದ ಪಾರಾಗಲು ಇರುವ ದಾರಿ. ಇದನ್ನು ಗಾಂಧೀ ಜಯಂತಿಯ ಈ ಸಂದರ್ಭದಲ್ಲಿ ಜನರು ಅರ್ಥ ಮಾಡಿಕೊಳ್ಳಬೇಕು.

ಗಾಂಧಿ ಜಯಂತಿಯ ದಿನ ಭಾಷಣಗಳನ್ನು ಮಾಡಿ ಸಮಯ ಹಾಳು ಮಾಡುವ ಬದಲು ಪ್ರತಿಯೊಂದು ಹಳ್ಳಿಯವರೂ ಶ್ರಮದಾನ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಶ್ರಮದಾನ ಮಾಡುವುದು ಒಳ್ಳೆಯದು. ಬಡವ ಬಲ್ಲಿದರೆನ್ನದೆ ಪ್ರತಿಯೊಬ್ಬರೂ ಹಾರೆ, ಗುದ್ದಲಿಗಳನ್ನು ಹಿಡಿದು ರಸ್ತೆ ನಿರ್ಮಾಣ, ಸೈನ್ಯ ರಕ್ಷಣೆಯಂತಹ ರಚನಾತ್ಮಕ ಕಾರ್ಯಗಳಿಗಾಗಿ ಕನಿಷ್ಠ ಮೂರು ಗಂಟೆಯಷ್ಟಾದರೂ ಶ್ರಮ ಪಟ್ಟರೆ ಗಾಂಧೀಜಿ ಆತ್ಮಕ್ಕೆ ಶಾಂತಿ ಲಭಿಸೀತು.

***

'ಮುಂಜಾವು'ಗೆ ಚಂದಾದಾರರಾಗಿರಿ

## ಜನಾಭಿಪ್ರಾಯಕ್ಕೆ ಮನ್ನಣೆ: ಅಮೇರಿಕದಲ್ಲಿ — ಭಾರತದಲ್ಲಿ

ಉಡುಗೊರೆ ಇಲ್ಲದ ಕ್ರಿಸ್ಮಸ್ ಹಬ್ಬವನ್ನು ಆಚರಿಸುವುದಾದರೂ ಹೇಗೆ? ಅಮೇರಿಕೆಯ ಸಂಸತ್ ಸದಸ್ಯರು (ಸೆನೆಟರ್‌ಗಳು) ಕಳೆದ ಕ್ರಿಸ್ಮಸ್ ಹಬ್ಬಕ್ಕಾಗಿ ತಮ್ಮ ಉಡುಗೊರೆಯನ್ನು ತಾವೇ ಆರಿಸಿಕೊಂಡರು. ಉಡುಗೊರೆಯಾದರೂ ಏನು ಗೊತ್ತೇ?

ಪಾರ್ಲಿಮೆಂಟ್ ನಡೆಯುವ ದಿನಗಳ ಖರ್ಚಿಗೆಂದು ದಿನವೊಂದರ ತಲಾ ೭೫ ಡಾಲರ್‌ಗಳಷ್ಟು ಹಣಕ್ಕೆ ತೆರಿಗೆ ವಿನಾಯತಿ ನೀಡಬೇಕೆಂದು ಸಂಸತ್ತಿನಲ್ಲಿ ಸದಸ್ಯರು ಗೊತ್ತುವಳಿಯೊಂದನ್ನು ಮಂಡಿಸಿದರು. ಈ ಗೊತ್ತುವಳಿಯ ಪರವಾಗಿ ಎಲ್ಲಾ ಸೆನೆಟ್ ಹಾಗೂ ಕಾಂಗ್ರೆಸ್ ಸದಸ್ಯರು ಓಟು ನೀಡಿದರು. ಅಂತೂ ಸಂಸತ್ತಿನ ಕಡತಗಳಲ್ಲಿ ಈ "ಕ್ರಿಸ್ಮಸ್ ಉಡುಗೊರೆ" ದಾಖಲಾಯಿತು. ಈವರೆಗೆ ಪ್ರತೀ ಸಂಸತ್ ಸದಸ್ಯನಿಗೆ ೩,೦೦೦ ಡಾಲರ್‌ಗಳಿಗೆ ತೆರಿಗೆ ವಿನಾಯತಿ ಸಿಗುತ್ತಿತ್ತು. ಈ ಗೊತ್ತುವಳಿಯಿಂದಾಗಿ ೨೦,೦೦೦ ಡಾಲರ್‌ಗಳಿಗೆ ತೆರಿಗೆ ವಿನಾಯತಿ ಸಿಗುವಂತಾಯಿತು. ಇದರಿಂದಾಗಿ ಪ್ರತಿಯೊಬ್ಬ ಸಂಸತ್ ಸದಸ್ಯನಿಗೆ

(೩ನೇ ಪುಟಕ್ಕೆ)

24x36cm

## ಹೊರಲಾರೆವಯ್ಯ ಗಾಂಧಿ ನಿನ್ನ ಹೆಣಭಾರ

ಎಸ್. ಎಸ್. ವಿಶ್ವೇಶ್ವರ

ಗಾಂಧಿ, ಹೊರಲಾರೆವಯ್ಯ
ನೀ ಬಿಟ್ಟು ಹೋದ
ಹೆಣ ಭಾರವನ್ನ
ಮಾತು ಮಾತಿಗೆ
ಊರು ಊರಿಗೆ
ಬಿಡೆ ಬರುವ
ನಿನ್ನ ಹೆಸರನ್ನ
ನಿನ್ನನ್ನು ಕೊಂದವನು
ನಿನ್ನ ಹೆಸರನ್ನು
ಕೊಲ್ಲದೆ
ದಿನ ದಿನವೂ ನಿನ್ನ
ಹೆಸರು ಬಸಿರಾಗು
ವಂತೆ ಮಾಡಿ
ಆ
ಎಲ್ಲ ಪಿಂಡ
ಗಳನ್ನು ಸಾಕುವ
ಬೆಳೆಸುವ
ಅವುಗಳನ್ನು ಸಹಿಸಿ
ತತ್ತಿ ಹಾಕುವ
ಭಂಡ ಚಾಕರಿಯ
ಹೊರೆಯನ್ನ
ಹೊರಲಾರೆವಯ್ಯ
ನಿನ್ನ ಕೀರುತಿ ನಾಟಕ
ಕಂಪನಿಯಾಗಿ
ಮೈಕಾಗಿ
ಹರಿಜನೋದ್ಧಾರವಾಗಿ
ಪಾನಮಂದಿರವಾಗಿ
ಖಾದಿಯ ಖಂಡವಾಗಿ
ಹವನ ಹೋಮಗಳಾಗಿ
ಮಹಾಮಜ್ಜನವಾಗಿ
ತೊಟ ತೊಟನೆ
ಇಳಿಯುತ್ತಾ; ಮತ್ತೆ
ಅಂಡ ಪಿಂಡಗಳಾಗಿ
ಚಪ್ಪಾಳೆಯಾಗಿ
ಕಿವಿಯಿಂದ ಬಾಯಾಗಿ
ಒಮ್ಮಿಂದೊಮ್ಮೆಲೇ
ಚಂಡಿ ಚಾಮುಂಡಿಯಾಗಿ
ಧಡಿಯಾಗಿ ಆಡುತ್ತ
ಮೈಮೇಲೆ ಓಡಾಡಿ
ನೆಕ್ಕುವ ಮುಳ್ಳ ನಾಲಿಗೆ
ಯಾಗಿ, ಪುಳಕಗೊಳ್ಳುತ್ತಿರುವ
ನಿನ್ನ ಹೆಸರಿನ ಭಾರವನ್ನ
ಹೊರಲಾರೆವಯ್ಯ
ನಾವು ಹೊರಲಾರೆವು



# ರಣ ಹದ್ದುಗಳು

೧೯೮೨ ರಿಂದೀಚೆಗೆ ಕಾಣವಿದ್ದಂತಹ ಪ್ರವಾಹ ತುಂಗಾ ನದಿಯಲ್ಲಿ ಬಂದು ಹತ್ತಾರು ಮನೆಗಳನ್ನು ನಾಶಮಾಡಿದ್ದಲ್ಲದೆ ಸಾವಿರಾರು ಕುಟುಂಬಗಳ ಆಸ್ತಿಪಾಸ್ತಿಗೆ ಮುಖ್ಯವಾಗಿ ಜಮೀನಿಗೆ ಭಾರಿ ನಷ್ಟವನ್ನು ಉಂಟುಮಾಡಿತು. ಹೆಸರು ಕೇಳದಿದ್ದ ಹಳ್ಳಗಳೆಲ್ಲಾ ಹುಚ್ಚು ಹೊಳೆಗಳಾಗಿ ಹರಿದವು. ಇದಾಗಿ ಈಗ ಸುಮಾರು ೩ ತಿಂಗಳೇ ಆಗಿಹೋಗಿವೆ.

ನೆರೆ ಬಂದ ಹೊಸತರಲ್ಲಿ ಸರ್ಕಾರಿ ಅಧಿಕಾರಿಗಳು ಬಹಳ ಚುರುಕಾಗಿ ಓಡಾಡಿದರು. ಕೇವಲ ೧೫ ದಿನಗಳಲ್ಲಿ ಪರಿಹಾರ ದೊರಕಿಸುವ ಕೆಲಸ ಮುಗಿಸುವ ಮಾತಾಡಿದರು. ಮಂತ್ರಿಗಳಂತೂ ಸುಮಾರು ಒಂದು ವಾರ ಕಾಲ ಕ್ಷೇತ್ರದಲ್ಲೇ ಬಿಡಾರ ಹೂಡಿ, ಹತ್ತಾರು ಕಡೆಗಳಿಗೆ ಭೇಟಿಕೊಟ್ಟರು. ಲಕ್ಷಗಟ್ಟಲೆ ಪರಿಹಾರದ ಮಾತುಗಳು ಹಾರಾಡಿದವು. ಕಮ್ಮರಡಿಯಬಳಿಯ ಹಳ್ಳವೊಂದು ಗದ್ದೆ ನಾಶಮಾಡಿದ್ದನ್ನು ನೋಡ ಹೋದಾಗ ಅಧಿಕಾರಿಗಳ, ಪತ್ರಕರ್ತರ ಮತ್ತು ರೈತರ ಎದುರಲ್ಲಿ ಬೇಗಾನೆ, 'ಶಿವಮೊಗ್ಗ ಜಿಲ್ಲೆಗೆ ೫೦ಲಕ್ಷ ನಮ್ಮ ಜಿಲ್ಲೆಗೆ ೧ ಕೋಟಿ ರೂ. ಗಳನ್ನು' ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಯೋಜನೆಯಿಂದ ಒದಗಿಸುವುದಾಗಿ ಹೇಳಿದ್ದರು. ದೆಹಲಿಗೆ ಹೋದಾಗ ಕೇಂದ್ರ ಕೃಷಿ ಮಂತ್ರಿ ರಾವ್ ಬೀರೇಂದ್ರಸಿಂಗ್‌ಜೊತೆ ಹೆಚ್ಚು ವಿವರಚರ್ಚಿಸುವುದಾಗಿ ತಿಳಿಸಿದ್ದರು. ಇದೂಎಲ್ಲ ೩ ತಿಂಗಳ ಹಿಂದಿನ ಮಾತು.

ಸರ್ಕಾರದಿಂದ ಒಂದು ವಿಶೇಷ ಆಜ್ಞೆ ಬಂತು. (೧೦-೮-೮೨ ರದ್ದು.) ನೆರೆಯಲ್ಲಿ ಮನೆ ಕಳಕೊಂಡವರಿಗೆ ಜಿಲ್ಲಾಧಿಕಾರಿಗಳು ಪರಿಹಾರ ರೂಪದಲ್ಲಿ ನೀಡಬಹುದಾಗಿದ್ದ ಒಟ್ಟು ಪ್ರಮಾಣವನ್ನು ೧೫೦೦ ರೂಗಳಿಂದ ೩೫೦೦ ರೂ ವರೆಗೆ ಏರಿಸಲಾಗಿದೆ ಎಂಬಿತ್ತು ಆ ಆಜ್ಞೆ. ಪರಿಹಾರ ಒದಗಿಸುವಲ್ಲಿ ಸರ್ಕಾರದ ಬಳಿ ಹಣಕ್ಕೆ ಕೊರತೆಯಿಲ್ಲ ಎಂಬ ಹೇಳಿಕೆಗಳು ಪತ್ರಿಕೆಗಳಲ್ಲಿ ಪ್ರಕಟವಾದವು.

ಆದರೆ—

ಈಗ ೩ ತಿಂಗಳ ನಂತರವೂ ಪರಿಹಾರ ಒದಗಿಸುವ ಕೆಲಸ ಇನ್ನೂ ಮುಗಿದಿಲ್ಲ. ೩,೫೦೦ ರೂ. ಒದಗಿಸುವುದಿರಲಿ, ತಹಸೀಲ್ದಾರರು ಮಂಜೂರು ಮಾಡಬಹುದಾದ ಗರಿಷ್ಠ ೩೦೦ ರೂ. ಗಳನ್ನೇ ಪೂರ್ತಿ ನೀಡಲು 'ಹಣವಿಲ್ಲ'. ಕಂತಿನಲ್ಲಿ ಹಣ ಬಟವಾಡೆ. ಇಡೀ ಜಿಲ್ಲೆಗೆ ಜುಜುಬಿ ನಾಲ್ಕೈದು ಲಕ್ಷ ಪರಿಹಾರ ಹಣದ ಬೇಡಿಕೆ. ಅಷ್ಟಕ್ಕೆ ಕೂಡ 'ಗತಿಯಿಲ್ಲ'.

ಅದಷ್ಟು ಕೆಲಸವೂ ಎಲ್ಲ ಕಡೆ ಸಮರ್ಪಕವಾಗಿಲ್ಲ ಎಂಬ ದೂರು. ಎಲ್ಲಿ ಕೇಳಿದರೂ ಲಂಚದ, ಅವ್ಯವಹಾರದ ಗುಸುಗುಸು, ಬಿಸಿಬಿಸಿ ಸುದ್ದಿಗಳೇ. ಹೇಳಿ ಕೇಳಿ ನಾವು ಎಲ್ಲಾ ಮನುಷ್ಯತ್ವವನ್ನೂ ಗಾಳಿಗೆ ತೂರಿಕೊಂಡ ಜನ. ರೈಲು ಅಪಘಾತವಾದರೆ ಸತ್ತವರ, ಗಾಯಗೊಂಡವರ ಜೇಬು ಹಾರಿಸುವ ಮಟ್ಟಕ್ಕೆ ತಲುಪಿರುವವರು. ಅಂದಮೇಲೆ ಕೇಳಬೇಕೆ?

ಪರಿಹಾರದ ಅರ್ಜಿ ತಯಾರು ಮಾಡುವಲ್ಲಿಂದ ಹಂಚುವವರೆಗೆ ಭ್ರಷ್ಟಾಚಾರ, ಮೋಸ. ಅದರ ಮೇಲೆ ಮಧ್ಯವರ್ತಿಗಳು. ಎಲ್ಲ ಕಡೆ ಅಸಮಾಧಾನದ ವರದಿಗಳು ಬರುತ್ತಿವೆ. ಹರಿಹರಪುರ ಹೋಬಳಿಯ ಕೆಲವು ಹಳ್ಳಿಗಳಲ್ಲಿ ರೈತರು ಅಧಿಕಾರಿಗಳ ಮೇಲೆ ಗಲಾಟೆ ಮಾಡಿದರೆಂದು ಸುದ್ದಿ. ತೀರ್ಥಹಳ್ಳಿ ತಾ॥ ತೂದೂರಿನಲ್ಲಿ ಕೆನರಾ ಬ್ಯಾಂಕ್‌ನವರೇ ಪರಿಹಾರದ ಹಣದಿಂದ ಬ್ಯಾಂಕಿನ ವಹಿವಾಟು ಹೆಚ್ಚಿಸಿಕೊಳ್ಳುವ ಹಂಚಿಕೆ ಹೂಡಿದರೆಂದು ಒಂದು ವರದಿ.

ಇಷ್ಟರಮೇಲೆ, ೩,೬೦೦ ರೂ. ವಾರ್ಷಿಕ ವರಮಾನಕ್ಕಿಂತ ಹೆಚ್ಚಿದ್ದವರಿಗೆ (ಕನಿಷ್ಠ ಆರೇಳು ಎಕರೆವರೆಗಾದರೂ) ಯಾವುದಾದರೂ ರೀತಿಯ ಪರಿಹಾರ ಕೊಡಿಸಬೇಕೆಂಬ ಕೂಗು, ಮೊರೆ ಗಾಳಿಯಲ್ಲೇ ಆವಿಯಾಗಿ ಹೋಗಿವೆ. ಆಶ್ವಾಸನೆಯೂ ಅಷ್ಟೇ.

ಒಟ್ಟಿನಲ್ಲಿ, ಎಲ್ಲಿ ನೋಡಿದರೂ ರಣಹದ್ದುಗಳು. ಜನ–ಜಾನವಾರುಗಳು ಹಾಹಾಕಾರ ಮಾಡಿ ಸಾಯುತ್ತಿದ್ದರೆ ಇವು ಹಬ್ಬ ಮಾಡಿಕೊಳ್ಳುತ್ತವೆ. ಎಲ್ಲ ದುರಂತವನ್ನೂ ತಮ್ಮ ಲಾಭಕ್ಕೆ ಪರಿವರ್ತಿಸಿಕೊಳ್ಳುತ್ತವೆ.

–ಸಂಪಾದಕ.

# ಜನಾಭಿಪ್ರಾಯಕ್ಕೆ ಮನ್ನಣೆ:

## ಅಮೇರಿಕದಲ್ಲಿ — ಭಾರತದಲ್ಲಿ

(೨ನೇ ಪುಟದಿಂದ)

೧೨,೦೦೦ ಡಾಲರ್‌ಗಳಷ್ಟು ಹೆಚ್ಚು ಹಣ ಸಿಗುವಂತಾಯಿತು.

ಈ ಉಡುಗೊರೆಯು ಸಂಸತ್ ಸದಸ್ಯರಿಗೆ ಸಂತಸ ತಂದರೂ ಅಮೇರಿಕೆಯ ತೆರಿಗೆದಾರರಿಗೆ ಸಂತಸ ತರಲಿಲ್ಲ. ತಿಂಗಳೊಂದರಲ್ಲೇ ೨೦,೦೦೦ ತೆರಿಗೆದಾರರಿಂದ ಈ ವಿಚಾರವನ್ನು ಖಂಡಿಸುವ ಉಗ್ರ ಪ್ರತಿಭಟನಾ ಪತ್ರಗಳು ದೇಶದ ಉದ್ದಗಲದಿಂದಲೂ ಹಾರಾಡತೊಡಗಿದವು. ಪತ್ರಿಕೆಗಳೂ ಈ ಪ್ರತಿಭಟನೆಗೆ ಬೆಂಬಲವಿತ್ತವು.

ಕೊನೆಗೆ ಜನಾಭಿಪ್ರಾಯದ ವಿಶ್ವಸ್ವರೂಪಕ್ಕೆ ಅಮೇರಿಕದ ಸಂಸತ್ತು ತಲೆಬಾಗಿಸಿತು. ಕಳೆದ ತಿಂಗಳು ಅದೇ ಸಂಸತ್ತು ತನ್ನ ಸದಸ್ಯರಿಗಾಗಿ ತಾನೇ ಮಂಜೂರು ಮಾಡಿದ್ದ ತೆರಿಗೆ ವಿನಾಯತಿಯನ್ನು ಹಿಂತೆಗೆದುಕೊಂಡಿತು. ಇದು ಸುಸಂಸ್ಕೃತ ಪ್ರಜಾತಂತ್ರದ ಲಕ್ಷಣವೆಂದು ನನ್ನ ಅನಿಸಿಕೆ.

ಅಮೇರಿಕಾ ಸಂಸ್ಥಾನದ ಸಾರ್ವಜನಿಕ ಹಿತಾಸಕ್ತಿಯ ಸಂಘಟನೆಗಳು ತೆರಿಗೆದಾರರ ಈ ವಿಜಯದಲ್ಲಿ ಪ್ರಧಾನ ಪಾತ್ರವನ್ನು ವಹಿಸಿದ್ದವು. ನಮ್ಮ ಭಾರತದಲ್ಲಿ ಇಂತಹ ಘಟನೆಗಳು ನಡೆಯುವುದು ಸಾಧ್ಯವೇ? ಇಂತಹ ಜನಾಭಿಪ್ರಾಯ ರೂಪಿಸಲು ಸಾಧ್ಯವೇ? ಜನಾಭಿಪ್ರಾಯಕ್ಕೆ ಸರಕಾರಿ ವರಿಷ್ಠರು ಮಣಿಯುವುದು ಸಾಧ್ಯವೆ?

–ಡಾ॥ ರಮಾನಂದ ಕಾಮತ್,
ಪರ್ಪೆಚ್ಯುವಲ್ ಹೆಲ್ಪ್ ಮೆಡಿಕಲ್ ಸೆಂಟರ್
ಚಿಕಾಗೊ, ಅಮೇರಿಕಾ.

('ಬಳಕೆದಾರರ ವೇದಿಕೆ' ಪತ್ರಿಕೆಯಲ್ಲಿ)

(ನಮ್ಮಲ್ಲೂ ಆಳುವ ಪ್ರತಿನಿಧಿಗಳು ಹೀಗೇ ತಮ್ಮ ಭತ್ಯವನ್ನು ದಿಢೀರನೆ ಒಂದಕ್ಕೆರಡರಷ್ಟು ಹೆಚ್ಚಿಸಿಕೊಂಡಿದ್ದುಂಟು. ಆಗ ಪ್ರಕಟವಾದ ವಿರೋಧ ಅವರ 'ಅಂಡಿಗೂ ಮುಟ್ಟಲಿಲ್ಲ.' ಎಷ್ಟೆಂದರೂ ಅವರನ್ನು ಜನ ಚುನಾಯಿಸಿಬಿಟ್ಟಿದ್ದಾರಲ್ಲವೆ?)

### ಪತ್ರಿಕೆಯ ಸಂಪಾದಕರ ಉತ್ತರ

ಅಮೇರಿಕ ದೇಶದ ಜನಜೀವನಕ್ಕೂ ನಮ್ಮ ದೇಶದ ಪರಿಸರಕ್ಕೂ ಇರುವ ವ್ಯತ್ಯಾಸವನ್ನು ನಾವು ಮೊದಲು ಪರಿಗಣಿಸಿಕೊಳ್ಳಬೇಕಾಗಿದೆ. ಅಮೇರಿಕಾ ದೇಶದಲ್ಲಿ ಪ್ರಜಾತಂತ್ರ ಹಲವು ಶತಮಾನಗಳಿಂದ ಬೆಳೆದು ಬಂದಿದೆ. ನಮ್ಮಲ್ಲಿ ಪ್ರಜಾತಂತ್ರ ಕೇವಲ ೩೫ ವರ್ಷಗಳ ಇತ್ತೀಚಿನದ್ದು.

ದೈನಂದಿನ ಜೀವನದ ಬಗ್ಗೆ, ಜೀವನಾವಶ್ಯಕ ಹೊಟ್ಟೆ, ಬಟ್ಟೆ ಹಾಗೂ ವಸತಿಗಳ ಬಗ್ಗೆ ಅಮೇರಿಕೆಯ ಸಾಮಾನ್ಯ ಪ್ರಜೆ ತಲೆ ಕೆಡಿಸಿಕೊಳ್ಳಬೇಕಾಗಿಲ್ಲ. ಆದರೆ ಬೆಲೆ ಏರಿಕೆ, ಜೀವನಾವಶ್ಯಕ ಸಾಮಗ್ರಿಗಳ ಕೊರತೆ, ಹಣದುಬ್ಬರ, ಕಾಳಸಂತೆ, ಜನಸಂಖ್ಯಾ ಸ್ಫೋಟ, ಭ್ರಷ್ಟಾಚಾರ, ನೈತಿಕ ಅಧಃಪತನ ಮೊದಲಾದ ಅಸಂಖ್ಯ ಸಮಸ್ಯೆಗಳನ್ನು ತನ್ನ ಬೆನ್ನಮೇಲೆ ಹೊತ್ತ ಸಾಮಾನ್ಯ ಭಾರತೀಯನಿಗೆ ನಾಳೆಯ ಬಗ್ಗೆ ಚಿಂತಿಸುವ ಶಕ್ತಿ ಇಲ್ಲವಾಗಿದೆ. ಕೋಟಿಗಟ್ಟಲೆ ಭಾರತೀಯರಿಗೆ ಇಂದು ಮಧ್ಯಾಹ್ನದ ಅನ್ನ ಎಲ್ಲಿಂದ ಎಂದು ತಿಳಿದಿಲ್ಲ. ಇಂದು ರಾತ್ರಿ ಮಲಗುವ ಸ್ಥಳ ಸಿಕ್ಕಿಲ್ಲ. ಇರುವ ಸಮಸ್ಯೆಗಳೇ ಜಾಲ್ಬಣಗೊಳ್ಳುತ್ತಿವೆ. ಮಾತ್ರವಲ್ಲ, ಹೊಸ ಹೊಸ ಸಮಸ್ಯೆಗಳು ನಾಯಿಕೊಡೆಗಳಂತೆ ಉದ್ಭವಿಸುತ್ತಿವೆ.

ಇಂತಹ ವಾತಾವರಣದಲ್ಲಿ ತಮ್ಮ ಹಕ್ಕು ಹಾಗೂ ಹೊಣೆಗಾರಿಕೆಗಳ ಬಗ್ಗೆ ಜನಪಲ್ಲಿ ಅರಿವು ಮೂಡಿಸಲು ಎಷ್ಟು ಕಷ್ಟ ಎಂದು ನೀವು ಮನಗಾಣಬಹುದು. ಪ್ರಜೆಗಳಿಗಾಗುವ ಅನ್ಯಾಯಗಳ ವಿರುದ್ಧ ಜನಾಭಿಪ್ರಾಯ ರೂಪಿಸಲು ಇರುವ ಅಡಚಣೆಗಳಲ್ಲಿ ಶೇಕಡಾ ೮೦ ರಷ್ಟು ಜನ ಭಾರತೀಯರು ಅಶಿಕ್ಷಿತರಿರುವುದು ಒಂದು ಕಾರಣವಾದರೆ, ಸಾರ್ವಜನಿಕ ಹಿತಾಸಕ್ತಿಗಳ ರಕ್ಷಣೆಗಾಗಿ ಸಾಕಷ್ಟು ಶಿಸ್ತುಬದ್ಧ ಹಾಗೂ ತತ್ವಬದ್ಧ ಸಂಘಟನೆಗಳ ಕೊರತೆ ಇನ್ನೊಂದು ಕಾರಣ.

ಆದರೂ ಸಾಕಷ್ಟು ಆಸಕ್ತರೂ, ಅರ್ಥಿಕವಾಗಿ ಸಾಮರ್ಥ್ಯ ಉಳ್ಳವರೂ ಸಂಘಟಿತರಾದಲ್ಲಿ, ಇತರರಿಗೆ ತಮ್ಮ ಹಕ್ಕು ಹಾಗೂ ಹೊಣೆಗಾರಿಕೆಗಳ ಕುರಿತು ಅರಿವು ಮೂಡಿಸಲು ಹಾಗೂ ತಮಗೆ ಆಗುತ್ತಿರುವ ಅನ್ಯಾಯಗಳ ವಿರುದ್ಧ ಜನಾಭಿಪ್ರಾಯ ಮೂಡಿಸಲು ಸಾಧ್ಯವಿದೆ. ಈಗಲೂ ಕಾಲ ಮಿಂಚಿಲ್ಲ. ಪರಿಸ್ಥಿತಿಗೆ "ಹೊಂದಿಕೊಂಡು" ಹೋಗುವ ಬದಲು ನಮ್ಮಿಂದಾಗಿ ಪರಿಸ್ಥಿತಿಯೇ ಬದಲಾಗಬೇಕು ಎನ್ನುವ ಜಾಗ್ರತ ಪ್ರಜೆಗಳು ಸಂಘಟಿತರಾಗಬೇಕಾಗಿದೆ. "ಅಲ್ಪ ರಕ್ಷಣೆಗಾಗಿ ತಮ್ಮ ಸ್ವಲ್ಪ ಸ್ವಾತಂತ್ರ್ಯವನ್ನೂ ತ್ಯಜಿಸಲು ಸಿದ್ಧರಿರುವವರು ರಕ್ಷಣೆಯನ್ನೂ ಸ್ವಾತಂತ್ರ್ಯವನ್ನೂ ಪಡೆಯಲು ಅರ್ಹರಲ್ಲ" ಎನ್ನುವ ಬೆಂಜಮಿನ್ ಫ್ರಾಂಕ್ಲಿನ್ ಅವರ ಉಕ್ತಿಯನ್ನು ನಾವು ನೆನಪಿಸಬೇಕಾಗಿದೆ.

ಅಡಿಕೆ ಬೇಯಿಸಲು ಹಿಡಿಯುವ ಹೊತ್ತನ್ನ ಕಮ್ಮಿ ಮಾಡಿ, ಸೌದೆ ಖರ್ಚನ್ನು ಉಳಿಸುವ 'ಸಿಪ್ಪೆ ಒಲೆ'ಯ ಚಿತ್ರಸಹಿತ ಲೇಖನ — ಮುಂದಿನ ಸಂಚಿಕೆಯಲ್ಲಿ

# ದಲಿತರ ಹೋರಾಟದಿಂದ ತೆರವಾದ ಹೈಕೋರ್ಟ್ ತಡೆಯಾಜ್ಞೆ

ಕರ್ನಾಟಕ ಸರ್ಕಾರ ಪರಿಶಿಷ್ಟ ಜಾತಿ–ವರ್ಗಗಳ ಕೆಲವರಿಗೆ ದರ್ಖಾಸ್ತು ಭೂಮಿಗಳನ್ನು ಮಂಜೂರು ಮಾಡಿತ್ತು. ಇವನ್ನು ಮಾರುವುದು ಅಥವಾ ಇನ್ಯಾವುದೇ ರೀತಿ ಪರಭಾರೆ ಮಾಡುವುದು ಕಾನೂನಿಗೆ ವಿರುದ್ಧವಾಗಿದ್ದರೂ ದಲಿತರ ಅಜ್ಞಾನ, ದಾರಿದ್ರ್ಯಗಳನ್ನು ಬಳಸಿಕೊಂಡ ಹಣವಂತರು ಅತಿ ಕಡಿಮೆ ಬೆಲೆಗೆ ಕೊಂಡು, ದಲಿತರಿಗೆ ಭೂಮಿ ದಕ್ಕದಂತಾಗಿತ್ತು.

ಎಂ. ಡಿ. ಗಂಗಯ್ಯ,
ರಾಜ್ಯ ಸಂಚಾಲಕ,
ಕರ್ನಾಟಕ ದಲಿತ ಸಂಘರ್ಷ ಸಮಿತಿ.

ಕರ್ನಾಟಕ ದಲಿತ ಸಂಘರ್ಷ ಸಮಿತಿ ಈ ಅನ್ಯಾಯದ ವಿರುದ್ಧ ಹೋರಾಟ ಮಾಡಿದ್ದರ ಫಲವಾಗಿ ೧—೧—೧೯೭೮ ರಂದು ದೇವರಾಜಅರಸರ ಮಂತ್ರಿಮಂಡಲ ಸರ್ಕಾರ ದರ್ಖಾಸ್ತು ಭೂಮಿಗಳ ಪರಭಾರೆ ರದ್ದುಪಡಿಸುವ ಕಾನೂನು ಜಾರಿಗೆ ತಂದು, ದಲಿತರಿಂದ ದಕ್ಕಿಸಿಕೊಂಡ ಭೂಮಿಗಳನ್ನು ಬಿಡಿಸಿಕೊಡುವಂತೆ ಅಧಿಕಾರಿಗಳಿಗೆ ಆದೇಶಿಸಿತು. ಅಧಿಕಾರಿಗಳು ಇಂಥ ಪ್ರಕರಣಗಳನ್ನು ಪರಿಶೀಲಿಸಿ ಇತ್ಯರ್ಥಮಾಡಿ, ಭೂಮಿ ಕಳೆದುಕೊಂಡ ದಲಿತರಿಗೆ 'ಆರ್ಡರ್ ಕಾಪಿ' ಕೊಟ್ಟರು. ಇದರ ಮೇಲೆ ಭೂಮಾಲೀಕರು ಹೈಕೋರ್ಟಿನಿಂದ ತಡೆಯಾಜ್ಞೆ ತಂದರು ಈ ಸಮಸ್ಯೆಯ ವಿರುದ್ಧ ದ. ಸಂ. ಸಮಿತಿ ೧೯೮೦ ರ ಆಗಸ್ಟ್ ೧೫ನ್ನು 'ಕಪ್ಪು ದಿನಾಚರಣೆ" ಆಚರಿಸಿತು. ರಾಜ್ಯದ ಎಲ್ಲಾ ಕಡೆಗಳಿಂದ ಬಂದಿದ್ದ ಸುಮಾರು ೫ ಸಾವಿರಕ್ಕೂ ಹೆಚ್ಚು ದಲಿತರು ಬೆಂಗಳೂರಲ್ಲಿ ಬೃಹತ್ ಮೆರವಣಿಗೆ ನಡೆಸಿ ರಾಜ್ಯಪಾಲರಿಗೂ ಮುಖ್ಯ ಮಂತ್ರಿ ಗುಂಡೂರಾಯರಿಗೂ ಮನವಿ ಸಲ್ಲಿಸಿದರು.

ತಡೆಯಾಜ್ಞೆ ರದ್ದುಪಡಿಸುವಂತೆ ಒತ್ತಾಯಿಸಿ ೧೫–೮–೮೧ ರಂದು ಎಲ್ಲಾ ಜಿಲ್ಲೆ, ತಾಲ್ಲೂಕು ಸಮಿತಿಗಳು ಮೆರವಣಿಗೆ, ಸಭೆ ನಡೆಸಿದವು. ೧೧-೧-೮೨ ರಂದು ಒಂದು ದಿನದ ಸಾಂಕೇತಿಕ ಧರಣಿ ಸತ್ಯಾಗ್ರಹ ನಡೆಯಿತು. ೨೫-೮-೮೨ ರಂದು ಕಾನೂನು ಮಂತ್ರಿ, ಮುಖ್ಯಮಂತ್ರಿಗಳನ್ನು ಭೇಟಿ ಮಾಡಿ ೧೫ ದಿನದೊಳಗೆ ಸಮಸ್ಯೆ ಇತ್ಯರ್ಥ

(೫ನೇ ಪುಟಕ್ಕೆ)

## ಓದುಗರ ಪತ್ರಗಳು

'ಮುಂಜಾವು' ಸಂಪಾದಕರಲ್ಲಿ,

### ತೆಂಗಿನ ನಾರಿನ ಹಗ್ಗ ಮಾಡುವವರ ಬಗ್ಗೆ ಹುಷಾರಿ

ತೆಂಗಿನ ನಾರಿನ ಹಗ್ಗವನ್ನು ತಯಾರಿಸುವ ಒಂದು ಗುಂಪು ನಮ್ಮ ಕೊಪ್ಪದ ಸುತ್ತಮುತ್ತ ಕೆಲಸ ಕೇಳಿಕೊಂಡು ತಿರುಗುತ್ತಿದ್ದಾರೆ. ಅದು ಈ ಕಡೆಯವರಿಗೆ ಹೊಸ ಉದ್ಯೋಗ. ಅವರ ಕೆಲಸದ ದರ ಹೀಗೆ: ೬ ಅಡಿಗೆ ೧ ಮಾರಿನಂತೆ ೧೦೦ ಮಾರಿಗೆ ೧೮ ರೂಪಾಯಿ. ಮೊದಲ ನೋಟಕ್ಕೆ ನಮಗೆ ಇದು ಅಗ್ಗವೆಂದು ಕಾಣುತ್ತದೆ.

ನಮ್ಮಲ್ಲಿ ಕೆಲಸ ಮಾಡಿಸಿದಾಗ ೫ ಆಳು ೨ ದಿನಕ್ಕೆ ೧೮೦೦ ಮಾರು ಹಗ್ಗ ಮಾಡಿದರು. ಅದಕ್ಕೆ ೩೨೪ ರೂ. ಅಂದರೆ ೧ ಆಳಿಗೆ ೩೨ ರೂ. ತಗಲಿದಂತಾಯಿತು. ಇದು ತೀರ ದುಬಾರಿ ಎಂದು ಯಾರಿಗಾದರೂ ಗೊತ್ತಾಗುವಂಥದ್ದೇ. ಇಷ್ಟರ ಮೇಲೆ ಅವರ ಹಗ್ಗ ಕೂಡ ಸಾಕಷ್ಟು ದಪ್ಪ ಇರುವುದಿಲ್ಲ. ಕೆಯ್ ಹೊರೆಗೆ ಕೂಡ ಸಾಲುವುದಿಲ್ಲ.

ಆದ್ದರಿಂದ ಇವರಿಗೆ ಕೆಲಸ ಕೊಡುವವರು ಅವರ ಕೆಲಸವನ್ನು ನೋಡಿಕೊಂಡು ದರ ನಿಷ್ಕರ್ಷೆ ಮಾಡಬೇಕೆಂಬುದಾಗಿ ಈ ಮೂಲಕ ಎಲ್ಲರಿಗೂ ತಿಳಿಸುತ್ತಿದ್ದೇನೆ. ಅಲ್ಲದೆ ಇವರು ಪರವೂರಿನವರಾದ್ದರಿಂದ ಲೆಕ್ಕ ಚುಕ್ತ ಮಾಡುವಾಗ ನಮ್ಮ ಸಾಮಾನು ಸರಂಜಾಮುಗಳನ್ನು ಅತ್ಯಂತ ಜಾಗ್ರತೆಯಿಂದ ಪರೀಕ್ಷಿಸಿಕೊಳ್ಳುವುದೂ ಅಗತ್ಯ.

**—ಹೆಚ್. ನಾಗಭೂಷಣರಾವ್,**
ಹೆಡ್ಲುಕುಡಿಗೆ, ಕೊಪ್ಪ.

### "ಅಧಿಕಾರಿಗಳ ಕಣ್ಣು ಮುಚ್ಚಾಲೆ!"

ಶೃಂಗೇರಿ ತಾಲುಕ್ ಮರ್ಕಲ್ ಗ್ರಾಮದ ಕಿಗ್ಗಾದಲ್ಲಿ ೧೯೮೦ ರಲ್ಲಿ ನಡೆದ ಒಂದು ಘಟನೆ. ಇಲ್ಲಿಗೆ ಸಂಬಂಧಪಟ್ಟ ರೇಂಜ್ ಅಧಿಕಾರಿಗಳವರು ಬಂದು, ಕೆಲವು ನಾಟ ಹಲಗೆಗಳನ್ನು (೩೦ಕ್ಕೂ ಹೆಚ್ಚು ಹಲಗೆ) ಕಾನೂನು ರೀತ್ಯಾ ಸೀಜ್ ಮಾಡಿದ್ದಾರೆ. ನಂತರ ಅವರಿಗೆಲ್ಲಾ ಬೆದರಿಸಿ, ಹಲಗೆ ವಾರಸುದಾರರಿಂದ ದಂಡ ಕಟ್ಟಿಸಿಕೊಂಡಿದ್ದಾರೆ. ಅದಕ್ಕೆ ಯಾವುದೇ ರೀತಿಯ ಚರ್ಲ ಅಗಲೀ ರಸೀದಿ ಆಗಲೀ ಕೊಟ್ಟಿಲ್ಲ. ಇದುವರೆಗೆ ಆ ಹಲಗೆಗಳು ಹಾಗೇ ಸಬ್ ಕ್ವಾರ್ಟರ್ಸ್‌ನಲ್ಲಿ ಕೊಳೆಯುತ್ತಿವೆ. ಸಂಬಧಪಟ್ಟ ಅಧಿಕಾರಿಗಳನ್ನು ಕೇಳಿದಾಗ ಹರಾಜು ಹಾಕಿಸುವುದಾಗಿ ತಿಳಿಸಿದ್ದಾರೆ. ದಿನಗಳು ಕಳೆದು, ವರ್ಷಗಳುರುಳಿದರೂ ಇದರ ಬಗ್ಗೆ ಏನೂ ಮಾಡುತ್ತಿಲ್ಲ. ಅಧಿಕಾರಿಗಳು ಬಡ ಜನರಲ್ಲಿ ಸುಲಿಗೆ ಮಾಡಿ, ಹಲಗೆ ಕೊಡದೆ ಕಣ್ಣು ಮುಚ್ಚಾಲೆ ಆಡುತ್ತಿದ್ದಾರೆ. ಇದು ಕೂಡಲೇ ವ್ಯವಸ್ಥೆ ಯಾಗಬೇಕಾಗಿ ನೊಂದವರು ದೂರಿದ್ದಾರೆ.

**— ರಾಜಶೇಖರ, ಕಿಗ್ಗಾ.**

### ಪಶು ಇಲಾಖೆ?

೨೬-೯-೮೨ರ ಸಂಜೆ ೭ಗಂಟೆಗೆ ನನ್ನ ಮಗಳಿಗೆ ಹೆರಿಗೆ ಬೇನೆ ಶುರುವಾಯಿತು. ನಿಲುವಾಗಿಲು ಸೂಲಗಿತ್ತಿಯವರಲ್ಲಿಗೆ (ನಮ್ಮ ಸರ್ಕಲ್ ಅಂತೆ) ಹೋದರೆ ಅವರು ಬೇರೆ ಹಳ್ಳಿಗೆ ಹೋಗಿದ್ದರಿಂದ, ಹತ್ತಿರದ ಕುಪ್ಪನಮಕ್ಕಿ ಸೂಲಗಿತ್ತಿಯವರ ಹತ್ತಿರ, ಸ್ಥಳೀಯ ವಂದಿಗರೊಂದಿಗೆ ಹೋಗಿ, ಎಷ್ಟು ಕೇಳಿಕೊಂಡರೂ ೮ ಮೈಲಿ ದೂರದ ಹರಿಹರಪುರಕ್ಕೆ ಹೋಗಲು ಹೇಳಿದರೇ ವಿನಃ ಬಾಗಿಲು ಸಹಾ ತೆರೆಯಲಿಲ್ಲ. ನಮ್ಮ ಹಳ್ಳಿ ಬೇರೆ ಸರ್ಕಲ್ ಅಂತೆ. ಆಗ ಅರ್ಧ ರಾತ್ರಿಯ ಹೊತ್ತಾಗಿತ್ತು. ಬಸ್ಸುಗಳಿರಲಿಲ್ಲ.

ನಗರಗಳಲ್ಲಾದರೆ ಸಂಚಾರಿ ಆಸ್ಪತ್ರೆಯಂಥ ಸೌಲಭ್ಯಗಳಿರುತ್ತವೆ. ಸರಿಯಾದ ಬಸ್ಸಿನ ಸೌಕರ್ಯ ಕೂಡ ಇಲ್ಲದ ಈ ಹಳ್ಳಿಗಾಡಲ್ಲಿ ಅಷ್ಟು ಖಡಾಖಂಡಿತ ಮಾಡಿದರೆ ಹೇಗೆ?

ಪಶು ವೈದ್ಯ ಇಲಾಖೆಯಲ್ಲಾದರು ಕೆಲವರು ಹೀಗೆಲ್ಲ ತಾರತಮ್ಯ ಮಾಡದೆ ಸೇವೆ ಮಾಡುತ್ತಾರೆ. ಈ ಇಲಾಖೆಯವರು 'ವೈದ್ಯ' ಪದಕ್ಕೆ ಹೊರತಾದವರೆಂತ ಕಾಣುತ್ತೆ.

**ಲಕ್ಷ್ಮೀನಾರಾಯಣಪ್ಪ,**
ಕಾವಳಿ, ಶಾನುವಳ್ಳಿ ಅಂಚೆ.

### ಉತ್ಪ್ರೇಕ್ಷೆ

ನಿಮ್ಮ ೧೯-೯-೮೨ ಸಂಚಿಕೆಯಲ್ಲಿ ಪ್ರಕಟವಾದ "ಹಳ್ಳದನೆರೆ ಹಾವಳಿ ತಡೆಗಟ್ಟಲು ಕಲ್ಲುಕಟ್ಟ ಆಗತ್ಯ" ಎಂಬ ಶೀರ್ಷಿಕೆಯ ಅಡಿಯಲ್ಲಿ ಪ್ರಕಟವಾದ ವಿಷಯ ತಾಲ್ಲೋಕ್ ಅಭಿವೃದ್ಧಿ ಮಂಡಳಿಗೆ ಅರ್ಜಿ ಕೊಟ್ಟಿರುವುದು ನಿಜವಾಗಿರುತ್ತದೆ. ಆದರೆ ಅದರಲ್ಲಿ ಪ್ರಕಟವಾದ ಪರಿಹಾರ ಹಂಚಿಕೆ ಯಲ್ಲಿನ ವಿಪರ್ಯಾಸ ವೆಂಬ ವಿಷಯ ಹೆಚ್ಚಿನದಾಗಿರುತ್ತದೆ.

**ಎಸ್. ನರಸಿಂಹಯ್ಯ, ಸುಂಕದ ಮಕ್ಕಿ**



## ಶೃಂಗೇರಿ ತಾ॥ರೇಷ್ಮೆ ಇಲಾಖೆಗೆ ಹೊಸ ಅಧಿಕಾರಿ

ಶೃಂಗೇರಿ: ಇಲ್ಲಿ ರೇಷ್ಮೆ ಇಲಾಖೆ ಕಛೇರಿ ಪ್ರಾರಂಭವಾದಾಗಿನಿಂದ ಖಾಲಿ ಇದ್ದ ಹಿರಿಯ ರೇಷ್ಮೆ ನಿರೀಕ್ಷಕರ ಹುದ್ದೆ ಇದೀಗ ಭರ್ತಿಯಾಗಿದೆ. ಸೆ. ೧೦ ರಂದು ಅಧಿಕಾರ ವಹಿಸಿಕೊಂಡ ಎಂ. ಆರ್. ಸಂಪತ್‌ಕುಮಾರ್ ರೇಷ್ಮೆ ಇಲಾಖೆಯಲ್ಲಿ ೧೦ ವರ್ಷಕ್ಕೂ ಹೆಚ್ಚಿನ ಅನುಭವಸ್ಥರು. ಶೃಂಗೇರಿ ತಾ॥ನಲ್ಲಿ ರೇಷ್ಮೆ ಫಸಲು ಇಳಿಮುಖವಾಗಿದ್ದು, ರೈತರು ರೇಷ್ಮೆ ಕೃಷಿಯ ಬಗ್ಗೆ ಹಿಂಜೇಟು ಹಾಕುತ್ತಿರುವ ಈ ಸಂದರ್ಭದಲ್ಲಿ ಇವರ ನೇಮಕದಿಂದ ರೇಷ್ಮೆ ಕೃಷಿ ಸುಧಾರಿಸೀತೆಂದು ನಿರೀಕ್ಷಿಸಲಾಗಿದೆ.

ಆದರೆ ಇವರು ಎದುರಿಸುತ್ತಿರುವ ಸಮಸ್ಯೆ ಒಂದೆರಡಲ್ಲ. ತಾಲೂಕಿನ ಆ ಮೂಲೆಯಿಂದ ಈ ಮೂಲೆಗೆ ಅಲ್ಲೊಬ್ಬರು-ಇಲ್ಲೊಬ್ಬರು ಕೃಷಿ ಮಾಡಿದ್ದಾರೆ. ಕೇಂದ್ರಕ್ಕೆ ಮಂಜೂರಾದ ೫ ಜನ ಡೆಮಾನ್ಸ್ಟ್ರೇಟರ್ ಹುದ್ದೆಗಳ ಪೈಕಿ ಒಬ್ಬರೂ ಇಲ್ಲ. ಕಚೇರಿಯ ಬರವಣಿಗೆ ಕೆಲಸವೇ ೨-೩ ಗುಮಾಸ್ತರಿಗಾಗುವಷ್ಟಿರುತ್ತೆ. ಒಂದು ಜೀಪ್ ಮತ್ತು ಡ್ರೈವರ್ ಮಂಜೂರಾಗಿದ್ದರೂ ಸರಬರಾಜಿಲ್ಲ. (ಸರಬರಾಜಾಗುವ ಜೀಪನ್ನು ಎಲ್ಲ ಸರ್ಕಾರಿ ಇಲಾಖೆಗಳಂತೆ ಬಹುಶಃ ಮುಖ್ಯ ಕಚೇರಿಯಲ್ಲೇ ಇಟ್ಟುಕೊಳ್ಳಲಾಗುತ್ತೆ ಅಂತ ಕಾಣುತ್ತೆ.)

ಇಲಾಖೆ ಈ ಸಮಸ್ಯೆಗಳಲ್ಲಿ ಒಂದರ್ಧದಷ್ಟಾದರೂ ಬಗೆಹರಿಸಲು ಅಶಕ್ತವಾಗಿದ್ದಲ್ಲಿ ತಾ॥ನಲ್ಲಿ ರೇಷ್ಮೆ ಆಸೆ ಬಿಡುವುದೊಳ್ಳೆಯದು ಎಂಬುದು ಹಲವಾರು ಕೃಷಿಕರನ್ನು ಭೇಟಿ ಮಾಡಿದ ಈ ವರದಿಗಾರನ ಅನಿಸಿಕೆ.

## ಕೊಪ್ಪ ಪಂಚ್ಯಾತಿ ಅಧ್ಯಕ್ಷ ರಾಮಮೋಹನ್‌ರಾಜಿನಾಮೆ ಅಂಗೀಕಾರ

ಕೊಪ್ಪ: ಗ್ರಾಮಪಂಚ್ಯಾತಿಯ ಅಧ್ಯಕ್ಷ ಎಸ್. ಪಿ.ರಾಮಮೋಹನ್ ಅವರು ಅಧ್ಯಕ್ಷಸ್ಥಾನಕ್ಕೆ ಸಲ್ಲಿಸಿದ್ದ ರಾಜಿನಾಮೆ ಅಂಗೀಕಾರವಾಗಿದೆಯೆಂದು ವರದಿಯಾಗಿದೆ. ಹೊಸ ಅಧ್ಯಕ್ಷರ ಚುನಾವಣೆಗೆ ಇನ್ನೂ ದಿನ ನಿಷ್ಕರ್ಷೆಯಾಗಬೇಕಾಗಿದೆ. ಇವರ ರಾಜಿನಾಮೆಗೆ ಸದಸ್ಯರು ಬಹಳ ಕಾಲದಿಂದಲೂ ಬಾಯಿಮಾತಿನ ಒತ್ತಾಯ ತಂದಿದ್ದರಿಂದೂ, ಹಾಲಿ ಪಂಚ್ಯಾತಿಯೊಳಗೆ ಇರುವ ಪರಿಸ್ಥಿತಿಯಲ್ಲಿ ಅಧ್ಯಕ್ಷರ ಆಯ್ಕೆ ಸದಸ್ಯರ ಪಾಲಿಗೆ ಅಷ್ಟೇನೂ ಸುಗಮವಾದ ಕೆಲಸವಲ್ಲವೆಂದೂ ಹೇಳಲಾಗಿದೆ.

## ಹಲ್ಲೆ : ಠಾಣೆಗೆ ದೂರು

ಹೊಸಕೊಪ್ಪ: ಇಲ್ಲಿಗೆ ಸಮೀಪದ ಹಳೇಮಠ ಎಂಬಲ್ಲಿ ಶ್ರೀಮಂತ ಭೂಮಾಲೀಕ ವೆಂಕಟಯ್ಯ ಗೌಡ ಎಂಬವರು ನೆರೆಯ ಬಡ ರೈತ ಕುಟುಂಬದವರ ಮೇಲೆ ಸೆ. ೩೦ ರಂದು ಹಲ್ಲೆ ನಡೆಸಿದ್ದಾಗಿ ಕೊಪ್ಪ ಪೋಲೀಸರಿಗೆ ದೂರು ಕೊಡಲಾಗಿದೆ.

ಗಣೇಶ ಎಂಬವರು ಇತ್ತಿರುವ ದೂರಿನಲ್ಲಿ, ಗದ್ದೆಗೆ ನೀರು ಬಿಡುವ ಬಗ್ಗೆ ಪದೇ ಪದೇ ವ್ಯಾಜ್ಯ ತೆಗೆದು ಗಲಾಟೆ ಮಾಡುವುದಲ್ಲದೆ ಪ್ರಾಣಾಪಾಯದ ಬೆದರಿಕೆ ಕೂಡ ಇದೆಯೆಂದು ತಿಳಿಸಿದ್ದಾರೆ.

ಈ ಬಡ ಕುಟುಂಬವನ್ನು ಕಿರುಕುಳ ಕೊಟ್ಟು ಊರು ಬಿಡಿಸಿ, ಅವರ ಸ್ವಲ್ಪ ಜಮೀನನ್ನು ಕಬಳಿಸಲು ವೆಂಕಟೇಗೌಡ ಯತ್ನಿಸುತ್ತಿರುವುದಾಗಿಯೂ, ಜಮೀನನ್ನು ಮಾರಲು ಬಿಡದೆ, ತಾನೂ ಕೊಳ್ಳದೆ 'ನೀವು ನರಳೀ ನರಳೀ ಸಾಯ್ಬೇಕು' ಎಂದು ಅವರಿಗೆ ಹೇಳಿದ್ದಾಗಿಯೂ ಗೊತ್ತಾಗಿದೆ.

## ಕಮಂಡಲ ಗಣಪತಿಗೆ ದೇವಸ್ಥಾನಕಟ್ಟಲು ಯೋಜನೆ

ಕೆಸವೆ, (ಕೊಪ್ಪ ತಾ॥) : ಇಲ್ಲಿಗೆ ಸಮೀಪದ ಕಮಂಡಲು ಗಣಪತಿ ಕ್ಷೇತ್ರದಲ್ಲಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಯೋಜನೆಯಲ್ಲಿ ದೇವಸ್ಥಾನ ಮತ್ತು ಕಲ್ಯಾಣ ಮಂಟಪಗಳನ್ನು ಕಟ್ಟಲು ಒಂದು ಲಕ್ಷ ರೂ. ಗಳ ಯೋಜನೆ ಹಾಕಲಾಗಿದೆಯೆಂದು ಗ್ರಾಮ ಪಂಚಾಯ್ತಿ ಅಧ್ಯಕ್ಷ ಕೆ. ಎಸ್. ಶಾಂತಾರಾಂ 'ಮುಂಜಾವು' ಗೆ ತಿಳಿಸಿದ್ದಾರೆ. ಇಲ್ಲಿನ ಗಜಾನನ ಯುವಕ ಸಂಘದವರು ಸೆ.೧೦ ರಂದು ದೇವಸ್ಥಾನದ ಸಂಚಾಲಕ ನಾಗೇಂದ್ರರಾವ್ ನೇತೃತ್ವದಲ್ಲಿ ಕ್ಷೇತ್ರದಲ್ಲಿ ಶ್ರಮದಾನ ನಡೆಸಿದರು. ಇನ್ನು ೩ ವಾರ ಶ್ರಮದಾನ ನಡೆಸಲು ಉದ್ದೇಶಿಸಲಾಗಿದೆ.

## ತೆರವಾದ ತಡೆಯಾಜ್ಞೆ

(೩ನೇ ಪುಟದಿಂದ)

ವಾಗದಿದ್ದರೆ ಹಂತ ಹಂತವಾದ ಹೋರಾಟ ಪ್ರಾರಂಭಿಸುವ ಎಚ್ಚರಿಕೆ ಕೊಡಲಾಯಿತು.

ಸರ್ಕಾರದ ಮೇಲಿನ ಈ ಎಲ್ಲ ಒತ್ತಡದ ಪರಿಣಾಮವಾಗಿ, ಈ ಕಾಯಿದೆಯನ್ನು ಪ್ರಶ್ನಿಸಿದ್ದ ರಿಟ್ ಅರ್ಜಿಗಳ ಸಮುದಾಯವನ್ನೊಂದನ್ನು ವಜಾಮಾಡಿ ೧೬-೯-೮೨ ರಂದು ರಾಜ್ಯದ ಮುಖ್ಯ ನ್ಯಾಯಾಧೀಶರಾದ ಶ್ರೀ ಡಿ. ಎಂ. ಚಂದ್ರಶೇಖರ್ ಮತ್ತು ನ್ಯಾ. ಮೂ. ಶ್ರೀ ವೆಂಕಟಾಚಲಯ್ಯ ಐತಿಹಾಸಿಕ ತೀರ್ಪು ನೀಡಿದ್ದಾರೆ. ಇದರಿಂದ ೧೪ ಸಾವಿರಕ್ಕೂ ಹೆಚ್ಚು ದಲಿತರು ಕಳೆಕೊಂಡ ಸಾವಿರಾರು ಎಕರೆ ಭೂಮಿ ಅವರಿಗೆ ದೊರಕುವಂತಾಗುತ್ತದೆ.

ಸರಕಾರ ಕೂಡಲೇ ಕ್ರಮ ಜರುಗಿಸಿ ದಲಿತರಿಗೆ ಭೂಮಿ ಬಿಡಿಸಿಕೊಡಬೇಕೆಂದೂ, ಸಂಬಂಧಪಟ್ಟ ಅಧಿಕಾರಿಗಳು ಸಹಕರಿಸಬೇಕೆಂದೂ, ದಲಿತರು ಸದುಪಯೋಗಪಡಿಸಬೇಕೆಂದೂ ದ. ಸಂ. ಸಮಿತಿ ಮನವಿ ಮಾಡುತ್ತದೆ.

ಸೆ. ೩೦ರಂದು ಬಿಳಾಲುಕೊಪ್ಪದಲ್ಲಿ ನಡೆದ ಏಲಕ್ಕಿ ಬೆಳೆಗಾರರ ಸಭೆಯಲ್ಲಿನ ಶ್ಲೋತ್ರರಗಳನ್ನು ಮುಂದೆ ಪ್ರಕಟಿಸುತ್ತೇವೆ





ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
ಸಿರಿಮನೆ ನಾಗರಾಜ್.
ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ.